

# ಮಹಿಳೆಯ ಹಕ್ಕುಗಳು



# ನಮ್ಮ ಕಾನೂನುಗಳು

## 10 ಪೊಲೀಸರು ಮತ್ತು ನೀವು


ಪ್ರಕಾಶಕರು

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ

ಹಾಗೂ

ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಕರ್ನಾಟಕ ಸರಕಾರ

ಇವರಿಗಾಗಿ,

ಕವಿ ಕಾವ್ಯ ಟ್ರಸ್ಟ್, ಹೆಗ್ಗೋಡು

1993, ಡಿಸೆಂಬರ್.

**ಮೂಲ ಪ್ರಕಾಶಕರು**
ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ
ಇವರಿಗೆ
ಮಾರ್ಗ್ ತಂಡದವರಿಂದ

ಕನ್ನಡ ಅವತರಣಿಕೆಯ ಪ್ರಕಾಶನವನ್ನು
ಸಾಧ್ಯವಾಗಿಸಿದ **UNICEF** ಸಂಸ್ಥೆಯ ನೆರವನ್ನು
ಗೌರವದಿಂದ ನೆನೆಯುತ್ತೇವೆ.



**ಮುಖಪುಟ**
ಪ್ರಸನ್ನ

**ಪುಸ್ತಕ ವಿನ್ಯಾಸ**
ಮುದ್ರ ಸಿಸ್ಟಮ್ಸ್, ಹೆಗ್ಗೋಡು

**ಸಂಪಾದನೆ**
ಆಭ ಸಿಂಘಲ್ ಜೋಶಿ

**ಸಹಾಯ**
ಜ್ಯೋತಿ ಗುಪ್ತ, ಸೀಮ ಮಿಶ್ರ, ಕಮಲೇಶ ಕುಮಾರಿ

**ಅಕ್ಷರ ಜೋಡಣೆ**
ವಾಗರ್ಥ ಪ್ರಿಂಟಾನಿಕ್ಸ್, ಬೆಂಗಳೂರು

**ಮುದ್ರಕರು**
ಪಯೋನಿಧಿ ಪ್ರಿಂಟರ್ಸ್, ಬೆಂಗಳೂರು





ಎಂ. ವೀರಪ್ಪ ಮೊಯಿಲಿ
ಮುಖ್ಯ ಮಂತ್ರಿ

27, ನವೆಂಬರ್, 93.
ಬೆಂಗಳೂರು - 560001.




## ಸಂದೇಶ

ಮಹಿಳೆಯರ ಹಕ್ಕುಗಳನ್ನು ಕುರಿತ ಈ ಪುಸ್ತಕಮಾಲಿಕೆಯನ್ನು ಕನ್ನಡದ ಜನತೆಗೆ ಅರ್ಪಿಸಲಿಕ್ಕೆ ನನಗೆ ತುಂಬ ಹೆಮ್ಮೆ ಎನ್ನಿಸುತ್ತಿದೆ. ದುಡಿಯುವ ಮಹಿಳೆಯರು, ಗ್ರಾಮೀಣ ಮಹಿಳೆಯರು ಹಾಗೂ ಕೆಳವರ್ಗಗಳನ್ನು ಗಂಭೀರ ಸಮಸ್ಯೆಗಳು ಕಾಡುತ್ತಿವೆ. ಅವರು ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಕಾರ್ಮಿಕಳಾಗಿ, ಜೀತದಾಳಾಗಿ, ಮದುವೆಯಲ್ಲಿ, ವಿಚ್ಛೇದನದಲ್ಲಿ, ಆಸ್ತಿ ಹಕ್ಕಿನಲ್ಲಿ, ಕೋರ್ಟಿನಲ್ಲಿ, ಠಾಣೆಗಳಲ್ಲಿ, ಆಕೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾಳೆ. ಅನೇಕರು ಅತ್ಯಾಚಾರಕ್ಕೆ ಒಳಗಾಗುತ್ತಾರೆ. ರಾಜ್ಯಾಂಗದತ್ತವಾಗಿ ಹಾಗೂ ಕಾನೂನಿನ ಅಡಿಯಲ್ಲಿ ಅವರಿಗೆ ದಕ್ಕಿರುವ ಹಕ್ಕುಗಳ ಬಗ್ಗೆ ಅವರಿಗೆ ಅರಿವಿಲ್ಲ. ಅಂತಹ ಅರಿವು ಮೂಡದ ಹೊರತು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ನಿಲ್ಲಿಸುವುದೂ ಸಾಧ್ಯವಿಲ್ಲ. ಹಾಗೆಂದು ಭಾರಿ ಗಾತ್ರದ 'ಲಾ' ಪುಸ್ತಕಗಳನ್ನು ಓದಿ ಅರಗಿಸಿಕೊಳ್ಳಿ ಎಂದು ಅನಕ್ಷರಸ್ಥರಿಂದ ಹಾಗೂ ನವ ಸಾಕ್ಷರ ಮಹಿಳೆಯರಿಂದ ಅಪೇಕ್ಷಿಸುವುದೂ ಸಾಧುವಲ್ಲ. ಇಂತಹದ್ದೊಂದು ಸಂದಿಗ್ಧವನ್ನು ನಿವಾರಿಸುತ್ತದೆ, ಈ ಮಾಲಿಕೆಯ ಹತ್ತು ಪುಸ್ತಕಗಳು.

ನಮ್ಮ ಸರ್ಕಾರದ ಕನ್ನಡ ಜಾಗೃತಿ ವರ್ಷದ ಆಚರಣೆಯಲ್ಲಿ ಈ ಪುಸ್ತಕಗಳ ಪ್ರಕಟಣೆ ತುಂಬ ಮಹತ್ವಪೂರ್ಣ ಕೊಡುಗೆ ಎಂದು ನನ್ನ ಭಾವನೆ. ಕನ್ನಡದ ಬೆಳವಣಿಗೆ ತುಂಬ ಅಗತ್ಯವಿರುವುದು ಕೆಳವರ್ಗಗಳಿಗೆ ಹಾಗೂ ಮಹಿಳೆಯರಿಗೆ. ಅವರನ್ನು ಗಮನದಲ್ಲಿಟ್ಟುಕೊಂಡು, ಸರಳವಾದ ಭಾಷೆ ಬಳಸಿ, ಚಿತ್ರಗಳ ಸಹಿತ, ಅವರ ಬದುಕಿಗೆ ಅನ್ವಯಿಸುವ ಉದಾಹರಣೆಗಳೊಂದಿಗೆ, ರಚಿತವಾಗಿರುವ ಈ ಪುಸ್ತಕಗಳು ಕರ್ನಾಟಕದ ಮೂಲೆ ಮೂಲೆ ತಲುಪಬೇಕು ಎಂದು ನಾನು ಆಶಿಸುತ್ತೇನೆ.

(ಎಂ. ವೀರಪ್ಪ ಮೊಯಿಲಿ)

# ಪೊಲೀಸರು ಮತ್ತು ನೀವು

ಮೂಲ ಪಾಠ
ಮದನ್ ಲೋಕುರ್

ಚಿತ್ರಗಳು
ಸುರೇಶ್‌ಕುಮಾರ್

# ಪೊಲೀಸರು ಮತ್ತು ನೀವು

ಪೊಲೀಸರೊಂದಿಗೆ ನಮಗೆ ಹಲವು ರೀತಿಯಲ್ಲಿ ಸಂಪರ್ಕವೇರ್ಪಡುತ್ತದೆ. ಪೊಲೀಸರು ಇರುವುದು ನಮ್ಮ ರಕ್ಷಣೆಗಾಗಿ. ಆದ್ದರಿಂದ ಅವರಿಗೆ ಕೆಲವು ವಿಶೇಷ ಅಧಿಕಾರಗಳನ್ನು ನೀಡಲಾಗಿದೆ. ಕೆಲವು ಬಾರಿ ಈ ಅಧಿಕಾರಗಳ ದುರುಪಯೋಗವಾಗುತ್ತವೆ. ಆದುದರಿಂದ, ಪೊಲೀಸರೊಂದಿಗೆ ವ್ಯವಹರಿಸುವಾಗ ನಮ್ಮ ಹಕ್ಕುಗಳೇನು ಎಂಬದನ್ನು ತಿಳಿದುಕೊಂಡಿರುವುದು ಮುಖ್ಯ.

ಪೊಲೀಸರೊಂದಿಗೆ ವ್ಯವಹರಿಸುವಾಗ, ನೀವು ಗಮನದಲ್ಲಿಡಬೇಕಾದ ಕೆಲವು ಮುಖ್ಯ ಅಂಶಗಳು:

- ದೇಶದಲ್ಲಿನ ಪ್ರತಿಯೊಬ್ಬರಿಗೂ ಅನ್ವಯವಾಗುವಂಥ ಕಾನೂನೊಂದಿದೆ.
- ಪೊಲೀಸರು ಇರುವುದು ನಾಗರಿಕರ ಮತ್ತು ಕಾನೂನಿನ ರಕ್ಷಣೆಗಾಗಿ.
- ಪ್ರತಿಯೊಬ್ಬ ನಾಗರಿಕನು, ಅವನು ಶ್ರೀಮಂತನಿರಲಿ ಅಥವಾ ಬಡವನಿರಲಿ, ದುರ್ಬಲನಾಗಿರಲಿ ಅಥವಾ ಸಮರ್ಥನಿರಲಿ ಕಾನೂನಿನ ರಕ್ಷಣೆ ಪಡೆಯಬಹುದು.
- ಪೊಲೀಸರಿಗೆ ಕೆಲವೊಂದು ವಿಶೇಷ ಅಧಿಕಾರಗಳಿವೆ. ಹಾಗೆಂದ ಮಾತ್ರಕ್ಕೆ ಅವರು ತಮ್ಮ ಇಷ್ಟಾನುಸಾರ ವರ್ತಿಸಬೇಕೆಂದು ಅರ್ಥವಲ್ಲ. ಪೊಲೀಸರೂ ಸಹ ಕಾನೂನಿಗನುಸಾರವಾಗಿ ವರ್ತಿಸಬೇಕು.
- ಪೊಲೀಸಿನವನು ಯಾರೊಂದಿಗೇ ಆಗಲಿ ಅಸಭ್ಯವಾಗಿ ವರ್ತಿಸಿದಲ್ಲಿ ಅವನೂ ಸಹ ಕಾನೂನಿನ ದೃಷ್ಟಿಯಲ್ಲಿ ಶಿಕ್ಷಾರ್ಹ.
- ನಿಮ್ಮ ಹಕ್ಕುಗಳನ್ನು ನೀವು ತಿಳಿದಿದ್ದರೆ, ನೀವು ಹೆಚ್ಚು ಸಮರ್ಥರಾಗಿದ್ದು ಅದಕ್ಕಾಗಿ ಕೇಳಬಹುದು. ನ್ಯಾಯಕ್ಕಾಗಿ ನೀವು ಮೇಲಧಿಕಾರಿಯವರ ಬಳಿ ಹೋಗಬಹುದು.
- ಪೊಲೀಸರಿಂದ ಯುಕ್ತ ನೆರವು ಪಡೆಯಬೇಕಾದರೆ, ನೀವೂ ಸಹ ಸಾಧ್ಯವಾದಷ್ಟು ಮಟ್ಟಿಗೆ ಅವರೊಂದಿಗೆ ಸಹಕರಿಸಬೇಕು. ಅದಕ್ಕಾಗಿ ನಿಮ್ಮ ಕೆಲವು ಮೂಲ ಹಕ್ಕುಗಳನ್ನು ತಿಳಿದುಕೊಳ್ಳುವುದು ಮುಖ್ಯ.

# ದಸ್ತಗಿರಿ ಮಾಡುವುದು.

ಕಳೆದ ವಾರ, ಕಮಲೆ ತನ್ನ ಗೆಳತಿಯರೊಂದಿಗೆ ತರಕಾರಿ ತರುವುದಕ್ಕಾಗಿ ಮಾರುಕಟ್ಟೆಗೆ ಹೋಗಿದ್ದಳು. ಅನಿರೀಕ್ಷಿತವಾಗಿ ಕೆಲವು ಪೊಲೀಸರು ಬಂದು ಅವಳ ವಿರುದ್ಧವಾಗಿ ದೂರೊಂದನ್ನು ದಾಖಲು ಮಾಡಲಾಗಿದೆ ಎಂದು ಹೇಳಿದ್ದೇ ಅಲ್ಲದೆ ಅದಕ್ಕಾಗಿ ಅವಳನ್ನು ಬಂಧಿಸುತ್ತಿರುವುದಾಗಿ ಹೇಳಿದರು. ಇಬ್ಬರು ಪೊಲೀಸರು ಅವಳ ಕೈಯನ್ನು ಹಿಡಿದುಕೊಂಡು ಪೊಲೀಸ್ ಠಾಣೆಗೆ ಕರೆದೊಯ್ದರು. ಅವಳೊಂದಿಗೆ ತಾವೂ ಸಹ ಬರುವುದಾಗಿ ಅವಳ ಗೆಳತಿಯರು ಹೇಳಿದಾಗ, ಪೊಲೀಸರು ಅವರನ್ನು ಹಿಂದಕ್ಕೆ ತಳ್ಳಿದರು. ಯಾರೇ ವ್ಯಕ್ತಿಯನ್ನು ಈ ರೀತಿ ನಡೆಸಿಕೊಂಡಾಗ ಅವರು ಈ ಮುಂದಿನ ಕೆಲವು,ಮುಖ್ಯ ಅಂಶಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

- ದಸ್ತಗಿರಿ ಮಾಡುವ ಕಾಲದಲ್ಲಿ ಪೊಲೀಸರು ದಸ್ತಗಿರಿ ಮಡುವುದಕ್ಕೆ ಸಂಬಂಧಿಸಿದ ಕಾರಣಗಳನ್ನು ನಿಮಗೆ ತಿಳಿಸಬೇಕು.
- ನಿಮ್ಮ ಮೇಲೆ ಆರೋಪಿಸಲಾಗಿರುವ ಅಪರಾಧದ ಪೂರ್ಣ ವಿವರವನ್ನು ಕೊಡುವುದು ಅವಶ್ಯಕ. ದೂರು ಬಂದಿದೆ ಎಂದಷ್ಟೇ ಬಾಯಿಮಾತಿನಲ್ಲಿ ಹೇಳಿ ಪೊಲೀಸರು ಯಾರನ್ನೇ ಆಗಲೀ ಸುಲಭವಾಗಿ ದಸ್ತಗಿರಿ ಮಾಡುವಂತಿಲ್ಲ.



ದಸ್ತಗಿರಿ ಕಾಲದಲ್ಲಿ ಅನವಶ್ಯಕವಾಗಿ ಬಲಪ್ರಯೋಗ ಮಾಡುವುದು ಕಾನೂನು ಬಾಹಿರ





ಪೊಲೀಸ್ ಠಾಣೆಗೆ ಕರೆದೊಯ್ಯುವಾಗ ಯಾರಿಗೇ ಆಗಲಿ ಕೈಕೋಳ ತೊಡಿಸಬಾರದು

- ಕೆಲವು ಬಗೆಯ ಅಪರಾಧಗಳ ಸಂಬಂಧದಲ್ಲಿ ನಿಮ್ಮನ್ನು ವಾರೆಂಟು ಇಲ್ಲದೆಯೇ ಬಂಧಿಸಬಹುದು. ಅಂತಹ ಸಂದರ್ಭಗಳಲ್ಲಿ ಬಂಧನದ ವಾರೆಂಟನ್ನು ನಿಮಗೆ ತೋರಿಸುವ ಅವಶ್ಯಕತೆ ಇರುವುದಿಲ್ಲ.
- ನೀವು ಕಾನೂನಿನ ನೆರವನ್ನು ಕೋರಬಹುದು. ಎಂದರೆ ನೀವು ಒಬ್ಬ ವಕೀಲರ ನೆರವನ್ನು ಕೋರಬಹುದು. ಸಾಧಾರಣವಾಗಿ ನಿಮ್ಮ ಕೋರಿಕೆಗೆ ಪೊಲೀಸರು ಸಮ್ಮತಿಸುತ್ತಾರೆ. ಆದರೆ ಅಲ್ಪಾವಧಿಯೊಳಗೆ ಮತ್ತು ಸೂಕ್ತ ಕಾಲದೊಳಗೆ ವಕೀಲನೊಬ್ಬನು ದೊರೆಯುವಂತಿರಬೇಕು.
- ಪೊಲೀಸರು ದಸ್ತಗಿರಿ ಮಾಡುವ ವ್ಯಕ್ತಿಯ ಮೇಲೆ ಕೈ ಮಾಡುವುದು ಕಾನೂನುಬಾಹಿರ. ಒಬ್ಬರನ್ನು ದಸ್ತಗಿರಿ ಮಾಡಿದಾಗ ಅಂಥ ವ್ಯಕ್ತಿಯ ದೇಹವನ್ನು ಮುಟ್ಟುವುದೂ ಸಹ ಕಾನೂನು ಬಾಹಿರವಾಗಬಲ್ಲದು. ಪುರುಷ ಪೊಲೀಸ್ ಒಬ್ಬ ಮಹಿಳೆಯ ಶರೀರವನ್ನು ಮುಟ್ಟುವಂತಿಲ್ಲ.
- ದಸ್ತಗಿರಿ ಮಾಡುವಾಗ ಕೈಗೆ ಕೋಳ ತೊಡಿಸುವುದು ಕಾನೂನು ಬಾಹಿರ. ಅಪರಾಧಿಗಳೆಂದು ಈಗಾಗಲೇ ಗುರುತಿಸಲಾದವರಿಗೆ ಅಥವಾ ಬಂಧನದಿಂದ ಓಡಿಹೋಗಬಹುದಾದಂಥ ವ್ಯಕ್ತಿಗಳಿಗೆ ಮಾತ್ರ ಕೈಗೆ ಕೋಳ ತೊಡಿಸಲು ಅವಕಾಶವಿದೆ.
- ಪೊಲೀಸರು ದಸ್ತಗಿರಿಯ ವಿಷಯವನ್ನು ಮ್ಯಾಜಿಸ್ಟ್ರೇಟರಿಗೆ ಕೂಡಲೇ ವರದಿ ಮಾಡಬೇಕು.
- ದಸ್ತಗಿರಿ ಮಾಡಲಾದ ವ್ಯಕ್ತಿಯನ್ನು ದಸ್ತಗಿರಿ ಮಾಡಿದ 24 ಗಂಟೆಯೊಳಗೆ ಮ್ಯಾಜಿಸ್ಟ್ರೇಟರ ಮುಂದೆ ಹಾಜರು ಪಡಿಸುವುದು ಅತ್ಯವಶ್ಯ.
- ಮ್ಯಾಜಿಸ್ಟ್ರೇಟರ ಆದೇಶವಿಲ್ಲದೆ 24 ಗಂಟೆಗಳಿಗಿಂತಲೂ ಹೆಚ್ಚಿನ ಅವಧಿಯವರೆಗೆ ಒಬ್ಬ ವ್ಯಕ್ತಿಯನ್ನು ಬಂಧನದಲ್ಲಿಡುವುದು ಕಾನೂನುಬಾಹಿರ.
- ನಿಮ್ಮ ಸುರಕ್ಷತೆಗಾಗಿ ನಿಮ್ಮೊಂದಿಗೆ ಪೊಲೀಸ್ ಠಾಣೆಗೆ ಬರಲು ನಿಮ್ಮ ಗೆಳೆಯರು ಮತ್ತು ಬಂದುಗಳಿಗೆ ಹಕ್ಕು ಇದೆ. ಪೊಲೀಸರು ಅವರನ್ನು ಹಿಂದಕ್ಕೆ ತಳ್ಳುವಂತಿಲ್ಲ. ಹಾಗೇನಾದರೂ ಅವರು ಮಾಡಿದಲ್ಲಿ, ಅದು ಅತ್ಯಂತ ಶಂಕಾಸ್ಪದವಾಗಿರುತ್ತದೆ, ನೀವು ನಿಮ್ಮ ರಕ್ಷಣೆಯನ್ನು ನೋಡಿಕೊಳ್ಳಬೇಕಾಗುವುದು.

## ಪೊಲೀಸ್ ಠಾಣೆಯಲ್ಲಿ

**ಕಮಲೆಯನ್ನು ಪೊಲೀಸ್ ಠಾಣೆಗೆ ಕರೆದೊಯ್ದ ನಂತರ, ಅವಳನ್ನು ಚಿಕ್ಕ ಕೋಣೆಯೊಳಗೆ ತಳ್ಳಲಾಯಿತು. ಅವಳ ಕುಟುಂಬದವರು ಬರುವಷ್ಟರಲ್ಲಿ ಕೆಲವು ಪೊಲೀಸರು ಅವಳ ಮಾನಾಪಹರಣವನ್ನು ಮಾಡಿದ್ದರು ಮತ್ತು ಅವಳ ಸ್ಥಿತಿಯು ಶೋಚನೀಯವಾಗಿತ್ತು.**

- ಪೊಲೀಸ್ ಅಭಿರಕ್ಷೆಯಲ್ಲಿ ಕಿರುಕುಳ ಕೊಡುವುದು, ಹೊಡೆಯುವುದು ಅಥವಾ ಚಿತ್ರಹಿಂಸೆ ನೀಡುವುದು ಗುರುತರವಾದ ಅಪರಾಧಗಳಾಗಿವೆ. ತಮ್ಮ ಅಭಿರಕ್ಷೆಯಲ್ಲಿದ್ದಾಗ ಪೊಲೀಸರು ಮಹಿಳೆಯ ಮಾನಾಪಹರಣವನ್ನು ಮಾಡತಕ್ಕುದಲ್ಲ. ಯಾರೇ ಮಹಿಳೆಗೆ ಅಂತಹ ಸಂದರ್ಭ ಎದುರಾದಲ್ಲಿ ಅವಳು ರಕ್ಷಣೆಗಾಗಿ ಕೂಗಿಕೊಳ್ಳಬೇಕು.




ಠಾಣೆಗೆ ನಿಮ್ಮೊಂದಿಗೆ ಬರುವ
ನಿಮ್ಮ ಗುರುತಿನವರನ್ನಾಗಲೀ ಬಂಧುಗಳನ್ನಾಗಲೀ ಪೊಲೀಸರು ಒಳಗೆ ಬಿಡದೆ ಅಡ್ಡಿಪಡಿಸುವಂತಿಲ್ಲ



ಪೊಲೀಸ್ ಠಾಣೆಯಲ್ಲಿ ಬಂಧನದಲ್ಲಿರುವವರಿಗೆ ಹಿಂಸೆಕೊಡುವುದನ್ನು ಕಡ್ಡಾಯವಾಗಿ ನಿಷೇಧಿಸಿದೆ



ನಿಮಗೆ ಚಿತ್ರಹಿಂಸೆ ಕೊಟ್ಟಿದ್ದಲ್ಲಿ ಅಥವಾ ಕಿರುಕುಳ ಕೊಟ್ಟಿದ್ದಲ್ಲಿ ವೈದ್ಯಕೀಯ ತಪಾಸಣೆಗಾಗಿ ಕೇಳಿ

- ಯಾವನೇ ಪೊಲೀಸನು ನಿಮಗೆ ಕಿರುಕುಳ ಕೊಡಲು ಯತ್ನಿಸಿದಲ್ಲಿ ಅವನ ಅಥವಾ ಅವಳ ಹೆಸರು ಮತ್ತು ಅವರು ಹೇಗಿದ್ದಾರೆ ಎಂಬ ವಿವರಗಳನ್ನು ಮನಸ್ಸಿನಲ್ಲಿಯೇ ಗುರುತಿಟ್ಟುಕೊಳ್ಳಿ. ನೀವು ಅಂಥ ವ್ಯಕ್ತಿಗಳ ವಿರುದ್ಧ ಕ್ರಿಮಿನಲ್ ಕ್ರಮ ಪ್ರಾರಂಭಿಸಬಹುದು.
- ಪೊಲೀಸ್ ಅಭಿರಕ್ಷೆಯಲ್ಲಿರುವಾಗ ನಿಮಗೆ ಹೊಡೆದಿದ್ದಲ್ಲಿ ಅಥವಾ ಲೈಂಗಿಕ ಹಲ್ಲೆ ನಡೆದಿದ್ದಲ್ಲಿ ನೀವು ಕೂಡಲೇ ವೈದ್ಯಕೀಯ ತಪಾಸಣೆ ನಡೆಸುವಂತೆ ಕೇಳಿ. ಒಬ್ಬ ಸರ್ಕಾರಿ ವೈದ್ಯರು ನಿಮ್ಮನ್ನು ಪರೀಕ್ಷಿಸುವರು. ಅವರು ನಿಮಗೆ ಆಗಿರುವ ಗಾಯಗಳ ಬಗ್ಗೆ ಪ್ರಮಾಣಪತ್ರ ನೀಡುವರು.
- ಇದಾದ ನಂತರ ಮ್ಯಾಜಿಸ್ಟ್ರೇಟರಿಗೆ ನೀವು ದೂರು ಸಲ್ಲಿಸಬೇಕು. ದೂರಿನೊಂದಿಗೆ ವೈದ್ಯಕೀಯ ಪ್ರಮಾಣಪತ್ರದ ಒಂದು ಪ್ರತಿಯನ್ನು ಲಗತ್ತಿಸಬೇಕು.
- ಮಹಿಳಾ ಲಾಕ್-ಅಪ್‌ನಲ್ಲಿಡುವಂತೆ ನೀವು ಒತ್ತಾಯಿಸಬಹುದು. ಪೊಲೀಸ್ ಠಾಣೆಯಲ್ಲಿ ಮಹಿಳಾ ಲಾಕ್-ಅಪ್ ಇರದಿದ್ದಲ್ಲಿ, ಎಲ್ಲಿ ಇರುವುದೋ ಅಂಥ ಪೊಲೀಸ್ ಠಾಣೆಗೆ ನಿಮ್ಮನ್ನು ವರ್ಗಾಯಿಸುವಂತೆ ಕೇಳಿ.
- ಮಹಿಳಾ ಕಾನ್‌ಸ್ಟೇಬಲರು ಸಮಕ್ಷಮದಲ್ಲಿಯೇ ಇರಬೇಕು ಎಂದು ನೀವು ಒತ್ತಾಯಿಸಬೇಕು.

ಒಬ್ಬ ಮಹಿಳೆಯನ್ನು ಮಹಿಳಾ ಲಾಕ್-ಅಪ್‌ನಲ್ಲಿ ಮಾತ್ರವೇ ಇರಿಸಬಹುದು

ದಸ್ತಗಿರಿಯಾದ ಕೂಡಲೇ
ಒಬ್ಬ ವಕೀಲನ ನೆರವನ್ನು ಕೋರಿ



## ಜಾಮೀನು

ಕೆಲವು ದಿನಗಳ ಹಿಂದೆ ಪೊಲೀಸರು ನಮ್ಮ ಗ್ರಾಮದ ಯಾರೋ ಒಬ್ಬರನ್ನು ದಸ್ತಗಿರಿ ಮಾಡಿದುದಾಗಿಯೂ ತರುವಾಯ ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದುದಾಗಿಯೂ ನಾವು ಕೇಳಿದ್ದುಂಟು. ಹಾಗಾದರೆ ಜಾಮೀನು ಎಂದರೆ ಏನು?

ದಸ್ತಗಿರಿಯಾದ ಒಬ್ಬ ವ್ಯಕ್ತಿಯು ಅಪರಾಧದ ತನಿಖೆಗೆ ಅಗತ್ಯವೆಂದು ಕಂಡುಬಂದಾಗಲೆಲ್ಲ ಹಾಜರಾಗುವುದಾಗಿ ಮುಚ್ಚಳಿಕೆ ಬರೆದುಕೊಟ್ಟಲ್ಲಿ, ವಿಚಾರಣೆಯ ಕಾಲದಲ್ಲಿ ಅವನನ್ನು ಬಂಧನದಿಂದ ಬಿಡುಗಡೆ ಮಾಡಬಹುದು.

**ದಸ್ತಗಿರಿಯಾದ ವ್ಯಕ್ತಿಯು ಯಾವ ರೀತಿಯಲ್ಲಿ ಜಾಮೀನು ಪಡೆಯಬಹುದು ?**

ಎರಡು ಬಗೆಯ ಅಪರಾಧಗಳಿವೆ. ಒಂದು ಜಾಮೀನು ಪಡೆಯಬಹುದಾದ ಅಪರಾಧ, ಮತ್ತೊಂದು ಜಾಮೀನು ಪಡೆಯಲಾಗದಂಥ ಅಪರಾಧ. ಜಾಮೀನು ಪಡೆಯಬಹುದಾದಂಥ ಅಪರಾಧವಾದಲ್ಲಿ ಒಬ್ಬ ವ್ಯಕ್ತಿಗೆ ಜಾಮೀನಿನ ಮೇಲೆ ಬಿಡುಗಡೆಯಾಗುವ ಹಕ್ಕಿರುತ್ತದೆ. ಜಾಮೀನು ಪಡೆಯಲಾಗದಂಥ ಅಪರಾಧವಾದಲ್ಲಿ ಮ್ಯಾಜಿಸ್ಟ್ರೇಟರ ಆದೇಶದ ಮೇಲೆ ಮಾತ್ರ ಒಬ್ಬ ವ್ಯಕ್ತಿಯನ್ನು ಬಿಡುಗಡೆ ಮಾಡಬಹುದು.

- ದಸ್ತಗಿರಿಯ ಕಾಲದಲ್ಲಿ ಪೊಲೀಸರು ಬಂಧಿತನಿಗೆ ಅವನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಬಹುದೇ ಅಥವಾ ಆ ಅಪರಾಧದ ಸಂಬಂಧದಲ್ಲಿ ಮ್ಯಾಜಿಸ್ಟ್ರೇಟರು ಮಾತ್ರವೇ ಬಿಡುಗಡೆ ಮಾಡಬಹುದೆ ಎಂಬ ಬಗ್ಗೆ ತಿಳಿ ಹೇಳಬೇಕು. ಒಂದು ವೇಳೆ ಪೊಲೀಸರು ತಾವಾಗಿಯೇ ನಿಮಗೆ ಹೇಳದೆ ಇದ್ದರೆ, ನೀವು ಈ ಬಗ್ಗೆ ಅವರಿಂದ ಕೇಳಿ ತಿಳಿದುಕೊಳ್ಳಬೇಕು.
- ಅಪಾದಿತನನ್ನು ಜಾಮೀನಿನ ಮೇಲೆ ಸ್ವತಃ ತಾವೇ ಬಿಡುಗಡೆ ಮಾಡಬಹುದೆಂದು ಪೊಲೀಸರು ಹೇಳಿದರೆ ಆಗ ಅದು ಜಾಮೀನಿನ ಮೇಲೆ ಬಿಡುಗಡೆ ಮಾಡಬಹುದಾದಂಥ ಅಪರಾಧವಾಗಿರುತ್ತದೆ. ಆಗ ಆಪಾದಿತ ವ್ಯಕ್ತಿ ತನಗೆ ಜಾಮೀನು ನೀಡುವಂತೆ, ಸ್ನೇಹಿತ, ಸಂಬಂಧಿ ಅಥವಾ ನೆರೆಹೊರೆಯವರನ್ನು ಕೇಳಬಹುದು. ಸಾಮಾನ್ಯವಾಗಿ ಜಾಮೀನಿನ ಮೇಲೆ ಬಿಡಬಹುದಾದಂಥ ಅಪರಾಧದ ಸಂದರ್ಭದಲ್ಲಿ ಕೇಳಲಾಗುವ ಜಾಮೀನು ಅಥವಾ ಭದ್ರತೆಯ ಮೊತ್ತ ಅತ್ಯಲ್ಪವಾದುದಾಗಿರುತ್ತದೆ. ಹೆಚ್ಚೆಂದರೆ ಕೆಲವು ನೂರು ರೂಪಾಯಿಗಳಾಗಿರಬಹುದು.
- ಜಾಮೀನು ಪಡೆಯುವ ಕಾರ್ಯವಿಧಾನವು ಬಹು ಸರಳವಾಗಿದೆ. ಒಬ್ಬ ವಕೀಲನ ಸಹಾಯವಿಲ್ಲದೆಯೇ ನೀವು ಜಾಮೀನು ಪಡೆಯಬಹುದು. ಪೊಲೀಸಿನವರೇ ನಿಮಗೆ ಒಂದು ಪ್ರಪತ್ರವನ್ನು ಕೊಡುತ್ತಾರೆ ಅದನ್ನು ನೀವು ಭರ್ತಿ ಮಾಡಿಕೊಡಬೇಕು. ನಿಮಗೆ ಓದಲು ಅಥವಾ ಬರೆಯಲು ಬರದೇ ಇದ್ದಲ್ಲಿ ಅದನ್ನು ಭರ್ತಿ ಮಾಡಿಕೊಡುವಂತೆ ನಿಮ್ಮ ಸ್ನೇಹಿತರು ಅಥವಾ ಬಂಧುಗಳನ್ನು ಕೇಳಬಹುದು. ಅದನ್ನು ಭರ್ತಿ ಮಾಡಿಕೊಡುವಂತೆ ಪೊಲೀಸರನ್ನು ಸಹ ನೀವು ಕೇಳಬಹುದು. ಈ ಪ್ರಪತ್ರದಲ್ಲಿ ಅಗತ್ಯಪಡಿಸಲಾದ ಮೊತ್ತದ ಜಾಮೀನು ಅಥವಾ ಸ್ವಲ್ಪಮಟ್ಟಿನ ಭದ್ರತೆಯ ಬೆಲೆಯಷ್ಟು ಮೊತ್ತವನ್ನು ಸಂದಾಯ ಮಾಡುತ್ತೇನೆಂದು ನೀವು ಮುಚ್ಚಳಿಕೆ ಬರೆದುಕೊಡಬೇಕು. ಅಲ್ಲದೆ, ನಿಮಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳ ವೈಯಕ್ತಿಕ ಬಾಂಡುಗಳ ಅವಶ್ಯಕತೆ ಇರುತ್ತದೆ. ಎಂದರೆ, ನಿಮಗೆ ಚೆನ್ನಾಗಿ ತಿಳಿದಿರುವ ಇಬ್ಬರು ವ್ಯಕ್ತಿಗಳು ನಿಮ್ಮ ಬಗ್ಗೆ ತಾವು ಹೊಣಗಾರರಾಗಿರುವುದಾಗಿ ಲಿಖಿತದಲ್ಲಿ ಬರೆದುಕೊಡಬೇಕು. ಜಾಮೀನು ನೀಡುವ ಕಾಲದಲ್ಲಿ ಯಾವುದೇ ಹಣವನ್ನು ಸಂದಾಯ ಮಾಡಬೇಕಾಗಿಲ್ಲ.



## ಜಾಮೀನು ಪತ್ರ

ಜಾಮೀನಿಗಾಗಿ ಒಂದು ಪ್ರಪತ್ರವಿದೆ. ಪ್ರಪತ್ರದಲ್ಲಿ ಈ ಮುಂದಿನ ವಿವರಗಳನ್ನು ನೀಡಿ ಭರ್ತಿ ಮಾಡಬೇಕು.

- ನಿಮ್ಮ ಹೆಸರು
- ನಿಮ್ಮ ವಿಳಾಸ
- ಪೊಲೀಸ್ ಠಾಣೆ ಅಥವಾ ನ್ಯಾಯಾಲಯದ ಹೆಸರು
- ಭದ್ರತೆಯ ಮೊಬಲಗು
- ಜಾಮೀನಿನ ಷರತ್ತುಗಳು (ಅವಶ್ಯಕ ದಿನಾಂಕದಂದು ನ್ಯಾಯಾಲಯ ಅಥವಾ ಪೊಲೀಸ್ ಠಾಣೆಯಲ್ಲಿ ಹಾಜರಾಗುವುದಾಗಿ ಬರೆದುಕೊಡುವ ಮುಚ್ಚಳಿಕೆ).

ಒಂದು ವೇಳೆ ಜಾಮೀನಿನ ಷರತ್ತುಗಳನ್ನು ಪಾಲಿಸದೇ ಇದ್ದ ಪಕ್ಷದಲ್ಲಿ ಜಾಮೀನಿನ ಮೊತ್ತವನ್ನು ಸರ್ಕಾರ ಮುಟ್ಟುಗೋಲು ಹಾಕುತ್ತದೆ ಎಂಬುದಾಗಿ ಬರೆಯಲ್ಪಟ್ಟಿರುತ್ತದೆ.

ಜಾಮೀನು ಷರತ್ತುಗಳನ್ನು ಉಲ್ಲಂಘಿಸಿದರೆ ಜಾಮೀನು ಹಣವನ್ನು ಠೇವಣಿ ಇಡುವಂತೆ ನೋಟೀಸು ಕಳುಹಿಸಲಾಗುವುದು. ಸಂಬಂಧಪಟ್ಟ ವ್ಯಕ್ತಿಯು ಹಣವನ್ನು ಸಂದಾಯ ಮಾಡದಿದ್ದರೆ ಆ ವ್ಯಕ್ತಿಯ ಸ್ವತ್ತಿನ ಜಪ್ತಿಗಾಗಿ ವಾರಂಟು ನೀಡಲಾಗುವುದು.







- ಜಾಮೀನು ಸಾಧ್ಯವಿರುವ ಅಪರಾದವಾಗಿದ್ದಲ್ಲಿ ನಿಮ್ಮನ್ನು ಆ ಕೂಡಲೇ ಬಿಡುಗಡೆಮಾಡಬೇಕು. ಅದು ನಾಗರೀಕ ಹಕ್ಕು.
- ಬರಬೇಕೆಂದು ಹೇಳಿದಾಗಲೆಲ್ಲಾ ನೀವು ಪೊಲೀಸ್ ಠಾಣೆಗೆ ಹಾಜರಾಗಬೇಕಾಗುತ್ತದೆ.
- ನಿಮ್ಮನ್ನು ಮ್ಯಾಜಿಸ್ಟ್ರೇಟರು ಮಾತ್ರವೇ ಜಾಮೀನಿನ ಮೇಲೆ ಬಿಡುಗಡೆ ಮಾಡಬಹುದೆಂದು ಪೊಲೀಸರು ಹೇಳಿದಲ್ಲಿ, ಅಂಥ ಅಪರಾಧವನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗದಂಥ ಅಪರಾಧವೆಂದು ಕರೆಯಲಾಗುವುದು. ಎಂದರೆ ಹಕ್ಕಿನ ಮೇಲೆ ನೀವು ಜಾಮೀನು ಪಡೆಯಲಾಗುವುದಿಲ್ಲ. ಆಗ ನೀವು ಮ್ಯಾಜಿಸ್ಟ್ರೇಟರಿಗೆ ಅರ್ಜಿ ಸಲ್ಲಿಸಬೇಕಾಗುವುದು. ನಿಮ್ಮ ಪ್ರಕರಣದ ಸನ್ನಿವೇಶಗಳನ್ನವಲಂಬಿಸಿ ಮ್ಯಾಜಿಸ್ಟ್ರೇಟರು ಜಾಮೀನು ಕೊಡಬಹುದು ಅಥವಾ ಕೊಡದೇ ಇರಬಹುದು.

**ಯಾವುದೋ ಕಾರಣಕ್ಕಾಗಿ ಪೊಲೀಸರಾಗಲಿ ಅಥವಾ ಮ್ಯಾಜಿಸ್ಟ್ರೇಟರಾಗಲಿ ಜಾಮೀನು ಕೊಡದಿದ್ದಲ್ಲಿ ಅಂಥ ವ್ಯಕ್ತಿಯನ್ನು ಜೈಲಿಗೆ ಹಾಕಲಾಗುವುದೇ ?**

- ನಿಮ್ಮನ್ನು ಪೊಲೀಸ್ ಲಾಕ್ ಅಪ್‌ನಲ್ಲಿಡಬಹುದು ಅಥವಾ ಸೆರೆಮನೆಗೆ ಕಳುಹಿಸಬಹುದು; ಆದರೆ ದಸ್ತಗಿರಿಯಾದ 24 ಗಂಟೆಯೊಳಗಾಗಿ ನಿಮ್ಮನ್ನು ಮ್ಯಾಜಿಸ್ಟ್ರೇಟರ ಮುಂದೆ ಹಾಜರ್ಪಡಿಸಬೇಕು. ಎಂದರೆ ಮ್ಯಾಜಿಸ್ಟ್ರೇಟರ ಅನುಮತಿ ಇಲ್ಲದೆ ನಿಮ್ಮನ್ನು ಒಂದು ದಿನಕ್ಕಿಂತ ಹೆಚ್ಚಿಗೆ ಸೆರೆಯಲ್ಲಿಡಲಾಗದು ಎಂಬ ಅಂಶವನ್ನು ನೀವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

**ನೆನಪಿಡಿ :- ಜಾಮೀನಿನ ಮೇಲೆ ಬಿಡುಗಡೆಯಾಗಬಹುದಾದಂಥ ಅಪರಾಧವಾಗಿದ್ದಲ್ಲಿ ಅವಶ್ಯಕ ಭದ್ರತೆಯನ್ನು ಒದಗಿಸಿ ಜಾಮೀನಿನ ಮೇಲೆ ಬಿಡುಗಡೆಯಾಗಲು ನಿಮಗೆ ಹಕ್ಕಿದೆ. ಎಂದರೆ, ಅಂತಹ ಅಪರಾಧಗಳ ಸಂಬಂಧದಲ್ಲಿ ಅವಶ್ಯಕ ಭದ್ರತೆಯನ್ನು ಒದಗಿಸಿದ ಮೇಲೆ ನಿಮ್ಮನ್ನು ಬಿಡುಗಡೆ ಮಾಡಲು ಪೊಲೀಸರು ನಿರಾಕರಿಸುವಂತಿಲ್ಲ.**

## ವಿಚಾರಣೆ

**ರಾಣಿ ಗಿರಣಿಯೊಂದರಲ್ಲಿ ಕೆಲಸ ಮಾಡುತ್ತಾಳೆ. ಕಳೆದ ವಾರ ಗಿರಣಿಯಲ್ಲಿ ಒಂದು ಕಳ್ಳತನವಾಯಿತು. ಗಿರಣಿಯ ಮಾಲೀಕರು ದೂರು ಸಲ್ಲಿಸಿದರು. ಪೊಲೀಸರು ಇತರ ಕೆಲವು ಕೆಲಸಗಾರರೊಂದಿಗೆ ರಾಣಿಯನ್ನೂ ಬಂಧಿಸಿದರು. ಕೆಲವು ಕಾಗದಪತ್ರಗಳ ಮೇಲೆ ಸಹಿ ಮಾಡುವಂತೆ ಅವಳಿಗೆ ಒತ್ತಾಯಿಸಿದರು. ತಾನು ತಪ್ಪೊಪ್ಪಿಗೆ ಪತ್ರಕ್ಕೆ ಸಹಿ ಮಾಡಿದ್ದಾಗಿ ಅನಂತರ ಅವಳಿಗೆ ತಿಳಿಯಿತು. ಹಾಗೆಂದ ಮಾತ್ರಕ್ಕೆ ಅವಳು ಅಪರಾಧವನ್ನು ಮಾಡಿದಂತಾಗುವುದೇ ? ಅದಕ್ಕಾಗಿ ಅವಳು ಸೆರೆಮನೆಗೆ ಹೋಗಬೇಕಾಗುತ್ತದೆಯೇ ?**

- ಮೊದಲನೆಯದಾಗಿ ಯಾವುದೇ ಕಾಗದ ಪತ್ರದ ಮೇಲೆ, ಅದರಲ್ಲಿ ಏನು ಬರೆದಿದೆ ಎಂದು ತಿಳಿದುಕೊಳ್ಳದೆಯೇ ನೀವು ಸಹಿ ಮಾಡಕೂಡದು. ನೀವು ಅನಕ್ಷರಸ್ಥರಾದರೆ ಅದನ್ನು ಓದಿಹೇಳುವಂತೆ ನಿಮ್ಮೊಂದಿಗೆ ಇರುವ ಯಾರನ್ನಾದರೂ ಕೇಳಿ. ಓದಿಹೇಳುವಂತೆ ಪೊಲೀಸ್ ಠಾಣೆಯಲ್ಲಿರುವ ಯಾರನ್ನಾದರೂ ನೀವು ಕೇಳಬಹುದು.
- ಒಬ್ಬ ಪೊಲೀಸ್ ಅಧಿಕಾರಿಯ ಮುಂದೆ ನೀಡಲಾದ ತಪ್ಪೊಪ್ಪಿಗೆಯು ಒತ್ತಾಯ ಪೂರ್ವಕವಾದುದಾಗಲಿ ಅಥವಾ ಇಲ್ಲದಿರಲಿ, ಕಾನೂನು ಸಮ್ಮತವಾಗಿ ಮಾನ್ಯವಾಗುವುದಿಲ್ಲ. ಎಂದರೆ ಆ ತಪ್ಪೊಪ್ಪಿಗೆಯ ಅಧಾರದ ಮೇಲೆ ನಿಮ್ಮನ್ನು ದೋಷಿಯೆಂದು ಹೇಳಲಾಗುವುದಿಲ್ಲ.
- ಮ್ಯಾಜಿಸ್ಟ್ರೇಟರ ಮುಂದೆ ನೀಡಲಾದ ತಪ್ಪೊಪ್ಪಿಗೆಯು ಸಿಂಧುವಾದ ತಪ್ಪೊಪ್ಪಿಗೆಯಾಗುವುದು. ಮ್ಯಾಜಿಸ್ಟ್ರೇಟರನ ಮುಂದೆ ತಪ್ಪೊಪ್ಪಿಕೊಳ್ಳಲು ಪೊಲೀಸರು ನಿಮ್ಮನ್ನು ಬಲಾತ್ಕರಿಸಿದಲ್ಲಿ ಹಾಗೆ ಮಾಡಲು ನೀವು ನಿರಾಕರಿಸಬೇಕು ಹಾಗೂ ನಿಮ್ಮ ಮೇಲೆ ಒತ್ತಾಯ ಹೇರುತ್ತಿರುವ ವಿಷಯವನ್ನು ಮ್ಯಾಜಿಸ್ಟ್ರೇಟರಿಗೆ ತಿಳಿಸಬಹುದು.

**ಕೆಲವು ದಿವಸಗಳ ಹಿಂದೆ ಪೊಲೀಸಿನವನೊಬ್ಬನು ನೀರಜಳ ಮನೆಗೆ ಬಂದು ಯಾವುದೋ ಅಪರಾಧದ ಬಗ್ಗೆ ತಾನು ತನಿಖೆ ನಡೆಸುತ್ತಿರುವುದಾಗಿ ತಿಳಿಸಿ ಆ ಬಗ್ಗೆ ಅವಳನ್ನು ಪ್ರಶ್ನಿಸಬೇಕಾಗಿದೆ ಎಂದು ಹೇಳಿದ. ಪ್ರಶ್ನಿಸುವ ಸಲುವಾಗಿ ಅವಳನ್ನು ಪೊಲೀಸ್ ಠಾಣೆಗೆ ಕರೆದೊಯ್ದ. ಅವನು ರಾತ್ರಿ ಹೊತ್ತಿನಲ್ಲಿ ಅವಳನ್ನು ಪೊಲೀಸ್ ಠಾಣೆಗೆ ಕರೆದೊಯ್ಯುತ್ತಲೇ ಇದ್ದ. ಅನೇಕ ದಿನಗಳವರೆಗೆ ಅವನು ನೀರಜ ಮತ್ತು ಅವಳ ಕುಟುಂಬದವರನ್ನು ಚಿತ್ರಹಿಂಸೆ ಮಾಡುತ್ತಾ ಬಂದ. ಕಾನೂನು ಪೊಲೀಸರ ಈ ರೀತಿಯ ವರ್ತನೆಯಿಂದ ನಮ್ಮನ್ನು ರಕ್ಷಿಸುವುದೇ ?**



ಎಲ್ಲಿಗಾದರೂ ಒಬ್ಬ ಹೆಂಗಸನ್ನು ಕರೆದೊಯ್ಯಲಾಗದು

ಪೊಲೀಸರು ಸಹ ಕೆಲವು ನಿಯಮಗಳಿಗನುಸಾರವಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕು ಎಂದು ಕಾನೂನು ಹೇಳುತ್ತದೆ. ಅವು ಯಾವುವೆಂದರೆ:

- 15 ವರ್ಷ ವಯಸ್ಸಿನೊಳಗೆ ಇರುವ ಒಬ್ಬ ಸ್ತ್ರೀ ಅಥವಾ ಪುರುಷನನ್ನು ಅವರ ನಿವಾಸ

ಸ್ಥಳದಲ್ಲಿ ಮಾತ್ರ ಪ್ರಶ್ನಿಸಬೇಕೆ ಹೊರತು ಬೇರೆ ಕಡೆಯಲ್ಲಿ ಅಲ್ಲ. ನೀವಾಗಲೀ ಅಥವಾ ನೀರಜಳಾಗಲೀ ಅಥವಾ ಬೇರೆಯಾರೇ ಹೆಂಗಸಾಗಲೀ ಪ್ರಶ್ನೆ ಮಾಡುವುದಕ್ಕೆ ಪೊಲೀಸ್ ಠಾಣೆಗೆ ಹೋಗುವುದನ್ನು ನಿರಾಕರಿಸ ಬಹುದು.


ಅವಳನ್ನು ಅವಳ ನಿವಾಸ ಸ್ಥಾನದಲ್ಲಿ ಮಾತ್ರ ಪ್ರಶ್ನಿಸಬೇಕು

- ಪ್ರಶ್ನೆ ಮಾಡುವುದಕ್ಕೆ ಸಂಬಂಧಿಸಿದಂತೆ ಯಾವುದೇ ನಿರ್ದಿಷ್ಟ ಸಮಯವನ್ನು ಕಾನೂನು ನಿಗದಿಪಡಿಸಿಲ್ಲ. ನಿರ್ದಿಷ್ಟ ವೇಳೆಯಲ್ಲಿ ಮಾತ್ರ ನಿಮ್ಮನ್ನು ಪ್ರಶ್ನಿಸುವಂತೆ ನೀವು ಒತ್ತಾಯ ಹೇರುವಂತಿಲ್ಲ.
- ಆದರೆ ನಿಮ್ಮನ್ನು ಪ್ರಶ್ನಿಸುವುದಕ್ಕಾಗಿ ಆಯ್ಕೆ ಮಾಡಿಕೊಂಡ ವೇಳೆಯು ನಿಮಗೆ ಚಿತ್ರಹಿಂಸೆ ನೀಡುವ ಅಥವಾ ತೊಂದರೆ ನೀಡುವ ಉದ್ದೇಶದ್ದಾಗಿದೆ ಅಥವಾ ನಿಮ್ಮ ಸಚ್ಚಾರಿತ್ರಕ್ಕೆ ಕಳಂಕ ತರುವ ಉದ್ದೇಶದ್ದಾಗಿದೆ ಎಂದು ನಿಮಗೆ ಅನ್ನಿಸಿದಲ್ಲಿ ನೀವು ಮ್ಯಾಜಿಸ್ಟ್ರೇಟರಲ್ಲಿಗೆ ಹೋಗಿ, ನ್ಯಾಯಾಲಯದ ಮೂಲಕ, ಪ್ರಶ್ನಿಸುವುದಕ್ಕಾಗಿ ವೇಳೆಯನ್ನು ಗೊತ್ತುಪಡಿಸಬೇಕೆಂದು ಕೇಳಬಹುದು.

**ಒಬ್ಬ ವ್ಯಕ್ತಿಯು ತನ್ನನ್ನು ಪ್ರಶ್ನಿಸುತ್ತಿರುವ ಅವಧಿಯಲ್ಲಿ ಕಾನೂನಿನ ಸಹಾಯ ಅಥವಾ ಸ್ನೇಹಿತನ ನೆರವನ್ನು ಪಡೆಯಲು ಕೇಳಬಹುದೆ ?**

- ಹೌದು. ಸಾಧಾರಣವಾಗಿ ಪೊಲೀಸರು ನಿಮ್ಮ ಕೋರಿಕೆಯನ್ನು ನಿರಾಕರಿಸುವಂತಿಲ್ಲ.
- ನಿಮ್ಮನ್ನು ಆಪಾದನೆಗೆ ಗುರಿ ಮಾಡಬಹುದೆಂದು ಭಾವಿಸುವಂಥ ಪ್ರಶ್ನೆಗಳಿಗೆ ಉತ್ತರ ನೀಡಲು ನೀವು ನಿರಾಕರಿಸಬಹುದು.
- ಇತರ ಎಲ್ಲಾ ಪ್ರಶ್ನೆಗಳಿಗೆ ನೀವು ಸತ್ಯವಾದ ಉತ್ತರ ನೀಡಬೇಕು.
- ಒಬ್ಬ ಪೊಲೀಸ್ ಅಧಿಕಾರಿಯು ಹೇಳಿಕೆಯೊಂದನ್ನು ನೀಡುವಂತೆ ಮಾಡಲು ಯಾವುದೇ ರೀತಿಯ ಪ್ರಚೋದನೆಯನ್ನು ನಿಮಗೆ ನೀಡುವಂತಿಲ್ಲ.
- ಒಬ್ಬ ಪೊಲೀಸ್ ಅಧಿಕಾರಿಯು ನಿಮ್ಮನ್ನು ಬೆದರಿಸುವಂತಿಲ್ಲ ಅಥವಾ ನಿರ್ಬಂಧಿಸುವಂತಿಲ್ಲ; ಪೊಲೀಸರು ಕೇವಲ ಪ್ರಶ್ನಿಸುವುದಕ್ಕಾಗಿ ನಿಮ್ಮನ್ನು ಅವರ ಅಭಿರಕ್ಷೆಯಲ್ಲಿ ಅಥವಾ ಲಾಕ್ ಅಪ್‌ನಲ್ಲಿ ಇರಿಸುವಂತಿಲ್ಲ.
- ಪೊಲೀಸರು ನಿಮ್ಮ ಹೇಳಿಕೆ ಅಥವಾ ಯಾವುದೇ ಇತರ ಕಾಗದ ಪತ್ರಕ್ಕೆ ಸಹಿ ಮಾಡುವಂತೆ ನಿಮ್ಮನ್ನು ಒತ್ತಾಯಿಸಲಾಗದು.



ಬೆದರಿಕೆ ಅಥವಾ ಒತ್ತಾಯಕ್ಕೆ ಮಣಿದು ಯಾವುದೇ ಕಾಗದ ಪತ್ರದ ಮೇಲೆ ಸಹಿ ಮಾಡಬೇಡಿ

## ವಿಚಾರಣೆಯ ಸಮಯ

ಕ್ರಿಮಿನಲ್ ಅಪರಾಧಕ್ಕಾಗಿ ನೀವು ವಿಚಾರಣೆ ಎದುರಿಸುತ್ತಿರುವಾಗ ನೆನಪಿಡಿ:

- ನಿಮ್ಮ ಪರವಾಗಿ ಪ್ರಕರಣವನ್ನು ಸಮರ್ಥಿಸಿಕೊಳ್ಳಲು ಲಾಯರೊಬ್ಬರನ್ನು ಇಟ್ಟುಕೊಳ್ಳುವ ಅಧಿಕಾರ ನಿಮಗೆ ಇದೆ.
- ನೀವು ಬಡವರಾಗಿದ್ದು ವಕೀಲರ ಶುಲ್ಕವನ್ನು ಸಂದಾಯ ಮಾಡಲು ಅಸಮರ್ಥರಾಗಿದ್ದಲ್ಲಿ, ನಿಮಗೆ ಒಬ್ಬ ಲಾಯರನ್ನು ನೇಮಿಸಬೇಕೆಂದು ನ್ಯಾಯಾಲಯವನ್ನು ಕೋರಿ. ಆಗ ನೀವು ಲಾಯರಿಗಾಗಲಿ ಅಥವಾ ನ್ಯಾಯಾಲಯಕ್ಕಾಗಲಿ ಯಾವುದೇ ಹಣವನ್ನು ಸಂದಾಯ ಮಾಡಬೇಕಿಲ್ಲ.

## ಶೋಧನೆ

ಒಂದು ದಿನ ಗಿರಿಜಳ ಪಾನ್-ಬೀಡ ಅಂಗಡಿಗೆ ಕೆಲವು ಪೊಲೀಸರು ಬಂದರು. ಅವಳು ಮಾದಕವಸ್ತುಗಳನ್ನಿಟ್ಟಿರುವುದಾಗಿ ಅವಳ ಮೇಲೆ ಆಪಾದಿಸಿದರು. ಅವರು ಅವಳ ಅಂಗಡಿಯನ್ನು ಶೋಧಿಸಿದರಲ್ಲದೆ ಅವಳ ಶರೀರವನ್ನು ಶೋಧಿಸಿದರು. ಅವಳ ಬಳಿ ಕೆಲವು ಮಾದಕ ವಸ್ತುಗಳು ಕಂಡುಬಂದುದಾಗಿ ಅವರು ಕ್ಲೇಮು ಮಾಡಿದರು. ಗಿರಿಜಳನ್ನ ಮ್ಯಾಜಿಸ್ಟ್ರೇಟರ ಮುಂದೆ ಕರೆದೊಯ್ದಾಗ ಪೊಲೀಸರು ಅವಳನ್ನು ಯಾವ ರೀತಿ ನಡೆಸಿಕೊಂಡರು ಎಂಬುದನ್ನು ಅವಳು ಹೇಳಿದಳು. ಪೊಲೀಸರು ತಪ್ಪು ಮಾಡಿದ್ದಾರೆ ಎಂದು ಹೇಳಿದ ಮ್ಯಾಜಿಸ್ಟ್ರೇಟರು ಮುಂದುವರೆದು ಈ ರೀತಿ ಹೇಳಿದರು:

- ಒಬ್ಬ ಮಹಿಳಾ ಪೊಲೀಸ್ ಅಧಿಕಾರಿ ಮಾತ್ರವೇ ಮತ್ತೊಬ್ಬ ಮಹಿಳೆಯನ್ನು ಶೋಧಿಸಬೇಕು ಹಾಗಿದ್ದರೂ ಶೋಧನೆಯನ್ನು ಸಭ್ಯ ರೀತಿಯಲ್ಲಿ ಮಾಡಬೇಕು.
- ಒಬ್ಬ ಪುರುಷಪೊಲೀಸ್ ಅಧಿಕಾರಿಯು ಹೆಂಗಸಿನ ಶರೀರ ಶೋಧನೆ ನಡೆಸುವಂತಿಲ್ಲ. ಹಾಗೆ ಮಾಡಿದರೆ ಅದು ಕಾನೂನು ಬಾಹಿರವಾಗುತ್ತದೆ. ಒಬ್ಬ ಪುರುಷ ಪೊಲೀಸ್ ಅಧಿಕಾರಿಯಿಂದ ಶರೀರ ಶೋಧನೆಗೆ ಒಳಗಾಗಲು ಅವಳು ನಿರಾಕರಿಸಬಹುದು.
- ಶೋಧನಾ ವಾರೆಂಟು ಇಲ್ಲದೆಯೇ ಶೋಧನೆಯನ್ನು ನಡೆಸಬಹುದು.
- ಯಾವುದೇ ಶೋಧನೆ ಅಥವಾ ಜಫ್ತಿಯಿದ್ದರೆ ಅದನ್ನು ಸ್ಥಳೀಯರಾದ ಇಬ್ಬರು ಸ್ವತಂತ್ರ, ಗೌರವಾನ್ವಿತ ವ್ಯಕ್ತಿಗಳ ಸಮ್ಮುಖದಲ್ಲಿ ನಡೆಸಬೇಕು.
- ಯಾವುದೇ ವಸ್ತುವನ್ನು ಜಫ್ತಿ ಮಾಡಿದಲ್ಲಿ (ಅಥವಾ ಏನೂ ಸಿಕ್ಕದೆ ಹೋದಾಗ) ಪಂಚನಾಮೆಯೊಂದನ್ನು ತಯಾರಿಸಬೇಕು. ಅದರ ಒಂದು ಪ್ರತಿಯನ್ನು ನಿಮಗೆ ಕೊಡಬೇಕು, ಅದಕ್ಕೆ ಇಬ್ಬರು ಸ್ವತಂತ್ರ ಸಾಕ್ಷಿದಾರರು ಸಹಿ ಹಾಕಿರಬೇಕು.
- ನಿಮ್ಮನ್ನು ಶೋಧಿಸುವ ಮುಂಚೆ ಶೋಧನೆ ನಡೆಸುವಂಥ ವ್ಯಕ್ತಿಯನ್ನು ಶೋಧಿಸಬಹುದಾಗಿದೆ.



ಪುರುಷರೊಬ್ಬರು ಹೆಂಗಸಿನ ಶರೀರವನ್ನು ಶೋಧಿಸುವಂತಿಲ್ಲ

# ಅಪರಾಧಗಳನ್ನು ವರದಿ ಮಾಡುವುದು

ನಾವು ಒಂದು ಹಳ್ಳಿಯಲ್ಲಿ ವಾಸ ಮಾಡುತ್ತಿದ್ದೇವೆ. ನಮಗೆ ಚಿತ್ರಹಿಂಸೆ ಕೊಡುವಂಥ ಮತ್ತು ತೊಂದರೆ ಕೊಡುವಂಥ ಕೆಲವು ಬಲಿಷ್ಟ ಜನರು ಆ ಗ್ರಾಮದಲ್ಲಿದ್ದಾರೆ. ಒಂದು ದಿನ ನನ್ನ ಮಗಳಾದ ಬಸಂತಿಯು ಶಾಲೆಯಿಂದ ಹಿಂತಿರುಗಿ ಬರುತ್ತಿದ್ದಳು. ಜಮೀನ್ದಾರನ ಹತ್ತಿರ ಕೆಲಸ ಮಾಡುವ ಕೆಲವು ಹುಡುಗರು ಅವಳನ್ನು ಪೀಡಿಸಲು ಯತ್ನಿಸಿದರು. ಅಂಥ ಸಂದರ್ಭಗಳಲ್ಲಿ ನಾವೇನು ಮಾಡಬೇಕು?

ಬೇರೊಬ್ಬರಿಗೆ ಯಾವುದೇ ರೀತಿಯಲ್ಲಿ ಕೆಟ್ಟದ್ದನ್ನು ಉಂಟುಮಾಡುವುದು ಒಂದು ಅಪರಾಧ. ಒಬ್ಬ ಹುಡುಗಿಯನ್ನು ಪೀಡಿಸುವುದು ಒಂದು ಅಪರಾಧವೆಂದು ಪ್ರತಿಯೊಬ್ಬರಿಗೂ ತಿಳಿದಿದೆ. ವಾಸ್ತವವಾಗಿ, ಒಬ್ಬ ಹುಡುಗಿಯನ್ನು ಕೀಟಲೆ ಮಾಡುವುದೂ ಸಹ ಅಪರಾಧವೆ. ನಿಮ್ಮ ವಿರುದ್ಧವಾಗಿ ಯಾವುದೇ ಅಪರಾಧವು ನಡೆದಲ್ಲಿ, ಆ ಬಗ್ಗೆ ನೀವು ಪೊಲೀಸ್ ಠಾಣೆಯಲ್ಲಿ ವರದಿಯೊಂದನ್ನು ಸಲ್ಲಿಸಬೇಕು. ಕೆಲವು ಅಕ್ಕ ಪಕ್ಕದವರು ಮತ್ತು ಸ್ನೇಹಿತರೊಂದಿಗೆ ಹೋಗುವುದು ಉತ್ತಮ. ನಿಮ್ಮೊಂದಿಗೆ ಬರಲು ಯಾರೂ ಇಷ್ಟಪಡದಿದ್ದಲ್ಲಿ ನೀವೊಬ್ಬರೇ ಹೋಗಬಹುದು.

## ವರದಿ ಎಂದರೇನು ?

ಅಪರಾಧವೊಂದು ನಡೆದಿದೆ ಎಂದು ಪೊಲೀಸರಲ್ಲಿಗೆ ಹೋಗಿ ಹೇಳುವುದು ವರದಿಯೆನಿಸುತ್ತದೆ. ಇದನ್ನು ಪ್ರಥಮ ಮಾಹಿತಿಯ ವರದಿ ಅಥವಾ ಎಫ್ಐಆರ್ ಎನ್ನುವರು. ಆಗ ಪೊಲೀಸರು ವಿಷಯವನ್ನು ಪರಿಶೀಲಿಸುವರು.



ಕೀಟಲೆ ಮಾಡುವುದು ಕೂಡ ಒಂದು ಅಪರಾಧವೆ. ಹಾಗಾದಾಗ ಅದನ್ನು ಪೊಲೀಸರಿಗೆ ವರದಿ ಮಾಡಬೇಕು

ನಿಮ್ಮ ದೂರನ್ನು ದಾಖಲು ಮಾಡಿಕೊಳ್ಳಲು ಪೊಲೀಸರು ನಿರಾಕರಿಸಿದರೆ ಮೇಲಧಿಕಾರಿಯ ಬಳಿ ಹೋಗಿ

ಸಹಾಯಕ್ಕಾಗಿ ಹಿರಿಯ ಅಧಿಕಾರಿಗಳನ್ನು ಕೇಳಿ

**ಬಸಂತಿಯು ತಂದೆ ತಾಯಿಯರೊಂದಿಗೆ ಪೀಡನೆಯ ಬಗ್ಗೆ ದೂರು ಸಲ್ಲಿಸಲು ಠಾಣೆಗೆ ಹೋದಾಗ, ಅದನ್ನು ದಾಖಲು ಮಾಡಿಕೊಳ್ಳಲು ಪೊಲೀಸರು ನಿರಾಕರಿಸಿದರು. ಬಸಂತಿಯನ್ನು ಪೀಡಿಸಿದ ಹುಡುಗರ ಪರಿಚಯ ಪೊಲೀಸರಿಗೆ ಚೆನ್ನಾಗಿತ್ತು. ಹೀಗಾದಾಗ, ಬಸಂತಿ ಮಾಡಬೇಕಾದುದೇನು ?**

- ಬಸಂತಿಯು ಪೊಲೀಸ್ ಸೂಪರಿಂಟೆಂಡಂಟರನ್ನು ಅಥವಾ ಪೊಲೀಸ್ ಡೆಪ್ಯುಟಿ ಕಮೀಷನರರನ್ನು ಭೇಟಿ ಮಾಡಬಹುದು ಅಥವಾ ಅವರಿಗೆ ಆ ಬಗ್ಗೆ ಲಿಖಿತದಲ್ಲಿ ತಿಳಿಸಬಹುದು.
- ಅವರು ಅವಳ ದೂರಿನ ಬಗ್ಗೆ ಗಮನ ಹರಿಸುತ್ತಾರೆ. ಅಂಥ ಅಪರಾಧವೊಂದು ಘಟಿಸಿದ್ದರೆ ಪೊಲೀಸ್ ಠಾಣೆಯ ಪ್ರಭಾರದಲ್ಲಿರುವ ಅಧಿಕಾರಿಗೆ ದೂರನ್ನು ದಾಖಲು ಮಾಡಿಕೊಳ್ಳುವಂತೆ ನಿರ್ದೇಶಿಸುವರು.
- ಒಂದು ವೇಳೆ ಪೊಲೀಸ್ ಇಲಾಖೆಯ ಮೇಲಿನ ಅಧಿಕಾರಿಗಳೂ ಈ ಅಪರಾಧದಲ್ಲಿ ಷಾಮೀಲಾಗಿದ್ದರೆ ಅದೇ ವಾಸ್ತವಾಂಶಗಳ ಆಧಾರದ ಮೇಲೆ ಒಂದು ಖಾಸಗೀ ದೂರನ್ನು ಮ್ಯಾಜಿಸ್ಟ್ರೇಟರ ಮುಂದೆ ಸಲ್ಲಿಸಬೇಕು.
- ಮ್ಯಾಜಿಸ್ಟ್ರೇಟರು ಪ್ರಕರಣದ ಪ್ರಗತಿಯ ಬಗ್ಗೆ ತನಿಖಾಧಿಕಾರಿಯಿಂದ ವರದಿಯೊಂದನ್ನು ಕೇಳಬಹುದು.

**ಒಮ್ಮೆ ಸುನೀತ ಮತ್ತು ಅವಳ ತಂದೆತಾಯಿಯರು ಎಫ್‌ಐಆರ್ ವೊಂದನ್ನು ಸಲ್ಲಿಸಲು ಪೊಲೀಸ್ ಠಾಣೆಗೆ ಹೋಗಿದ್ದರು. ಆದರೆ ಅದನ್ನು ದಾಖಲ್ಮಾಡಿಕೊಳ್ಳಲು ಪೊಲೀಸರು ನಿರಾಕರಿಸಿ ಮ್ಯಾಜಿಸ್ಟ್ರೇಟರಲ್ಲಿಗೆ ಹೋಗಬೇಕೆಂದು ಅವಳಿಗೆ ಹೇಳಿದರು, ಕಾರಣವೇನು ?**

- ಸುನೀತಳು ತನ್ನ ಕಥೆಯನ್ನು ಹೇಳಿದಾಗ ಅವಳು ಸಂಜ್ಞೇಯವಲ್ಲದ ಅಪರಾಧದ ಬಗ್ಗೆ ದೂರು ಸಲ್ಲಿಸುತ್ತಿದ್ದಾಳೆ ಎಂದು ಪೊಲೀಸರಿಗೆ ಮನವರಿಕೆಯಾಯಿತು.
- ಸಂಜ್ಞೇಯವಲ್ಲದ ಅಪರಾಧವು ಸಾಮಾನ್ಯವಾಗಿ ಖಾಸಗಿ ಅಥವಾ ವೈಯಕ್ತಿಕ ಅಪರಾಧ ಸ್ವರೂಪದ್ದಾಗಿರುತ್ತದೆ. ಅಂದರೆ ಅಪರಾಧ ಸಾರ್ವಜನಿಕರಿಗೆ ಸಂಬಂಧಪಟ್ಟಿಲ್ಲದ್ದಾಗಿರುತ್ತದೆ. ಉದಾಹರಣೆಗೆ ಮಾನನಷ್ಟ, ಗರ್ಭಿಣಿಯಾಗಿದ್ದಾಗ ಸೇವೆಯಿಂದ ತೆಗೆದುಹಾಕಿದ್ದು...ಇತ್ಯಾದಿ.
- ಮ್ಯಾಜಿಸ್ಟ್ರೇಟರಿಂದ ಆದೇಶವಾಗದ ಹೊರತು ಸಂಜ್ಞೇಯವಲ್ಲದ ಅಪರಾಧವನ್ನು ಪೊಲೀಸರು ತನಿಖೆ ಮಾಡುವುದಿಲ್ಲ.

**ಸುನೀತಳು ಮ್ಯಾಜಿಸ್ಟ್ರೇಟರಲ್ಲಿಗೆ ಸೀದಾ ಹೋಗಿ ದೂರು ಸಲ್ಲಿಸಬಹುದೇ ?**

ಹೌದು, ಸುನೀತಳು ಮ್ಯಾಜಿಸ್ಟ್ರೇಟರಲ್ಲಿಗೆ ಹೋಗಿ ಮೌಖಿಕವಾಗಿ ಅಥವಾ ಲಿಖಿತದಲ್ಲಿ ದೂರು ಸಲ್ಲಿಸಬಹುದು.




- ಮ್ಯಾಜಿಸ್ಟ್ರೇಟರಿಗೆ ಸಂಜ್ಞೇಯವಲ್ಲದ ಅಪರಾಧವೊಂದನ್ನು ಮಾಡಲಾಗಿದೆ ಎಂದು ಮನದಟ್ಟಾದರೆ ತನಿಖೆ ಮಾಡುವಂತೆ ಅವರು ಪೊಲೀಸಿನವರಿಗೆ ಆದೇಶಿಸಬಹುದು.

ಪೊಲೀಸರು ಇತರ ಎಲ್ಲ ಪ್ರಕರಣಗಳ ಸಂಬಂಧದಲ್ಲಿ ಎಫ್‌ಐಆರ್ ಅನ್ನ ದಾಖಲು ಮಾಡಿಕೊಳ್ಳಲೇ ಬೇಕಾಗುತ್ತದೆ.

**ಎಫ್‌ಐಆರ್ ಅನ್ನು ದಾಖಲು ಮಾಡುವುದಕ್ಕೆ ಇರುವ ಕಾರ್ಯವಿಧಾನಗಳು ಯಾವುವು ?**

- ಎಫ್‌ಐಆರ್ ಅನ್ನು ಸಲ್ಲಿಸುವುದಕ್ಕೆಂದು ಯಾವುದೇ ನಿರ್ದಿಷ್ಟ ಪ್ರಪತ್ರ ಅಥವಾ ಕಾರ್ಯವಿಧಾನ ಇಲ್ಲ. ನೀವು ನಿಮಗೆ ಇಷ್ಟ ಬಂದ ಹಾಗೆ ಯಾವುದೇ ರೀತಿಯಲ್ಲಿ ಅದನ್ನು ಬರೆದುಕೊಡಬಹುದು.
- ನಿಮ್ಮ ಎಫ್‌ಐಆರ್ ನಲ್ಲಿ ಸಂಬಂಧಪಟ್ಟ ಎಲ್ಲ ವಾಸ್ತವಾಂಶಗಳೂ ಇರಬೇಕು, ಎಂದರೆ ನೀವು, ನಿಮ್ಮ ಹೆಸರು, ಅಪರಾಧಿಯ ಹೆಸರು, ಮತ್ತು ವಿಳಾಸ, ಅಪರಾಧಿಯು ನಿಮಗೆ ಗೊತ್ತಿಲ್ಲದ ಪಕ್ಷದಲ್ಲಿ ಅಥವಾ ಅವನು ಅಪರಾಧ ಮಾಡಿ ಓಡಿಹೋದ ಪಕ್ಷದಲ್ಲಿ ಅಪರಾಧಿಯ ವರ್ಣನೆ, ಸಂಭವಿಸಿದ ಘಟನೆ :(ಅಪರಾಧ) ಘಟನೆ ನಡೆದ ಸ್ಥಳ, ಇತ್ಯಾದಿ ವಿವರಗಳು ಇರಬೇಕು.

- ನಿಮಗೆ ಬರೆಯಲು ಬರದೇ ಇದ್ದರೆ, ನೀವು ಮೌಖಿಕವಾಗಿ ಸಹ ದೂರುಸಲ್ಲಿಸಬಹುದು. ಪೊಲೀಸರು ನಿಮ್ಮ ದೂರನ್ನು ಧಾಖಲು ಮಾಡಿಕೊಂಡು ನಿಮಗೆ ಅದನ್ನು ಓದಿ ಹೇಳಿ ವಿವರಿಸುವರು. ದೂರನ್ನು ಸರಿಯಾಗಿ ದಾಖಲು ಮಾಡಿಕೊಂಡಿದ್ದರೆ ನೀವು ನಿಮ್ಮ ಹೆಬ್ಬೆರಳಿನ ಗುರುತು ಹಾಕಬಹುದು. ಆದರೆ ಅದನ್ನು ಸರಿಯಾಗಿ ದಾಖಲು ಮಾಡಿಕೊಂಡಿಲ್ಲದಿದ್ದರೆ ಅದನ್ನು ಸರಿಯಾಗಿ ದಾಖಲು ಮಾಡಿ ಕೊಳ್ಳುವಂತೆ ಪೊಲೀಸಿನವರಿಗೆ ನೀವು ಕೇಳಬಹುದು.
- ಸರಿಯಾಗಿಲ್ಲದೆ ಇರುವ ದೂರಿಗೆ ನೀವು ಸಹಿ ಮಾಡಬಾರದು.
- ಪೊಲೀಸರು ಎಫ್‌ಐಆರ್‌ನ ಒಂದು ಪ್ರತಿಯನ್ನು ನಿಮಗೆ ನೀಡಬೇಕು. ಅದನ್ನು ಕೇಳಿ ಪಡೆಯುವುದು ನಿಮ್ಮ ಹಕ್ಕು.
- ನಿಮ್ಮೊಂದಿಗೆ ಯಾವುದೇ ಸಾಕ್ಷಿಯನ್ನು ಕರೆದುಕೊಂಡು ಹೋಗುವ ಅವಶ್ಯಕತೆ ಇಲ್ಲ. ಆದರೆ ಪೊಲೀಸಿನವರು ಒಂದು ವೇಳೆ ಅಸಭ್ಯವಾಗಿ ವರ್ತಿಸಿದಲ್ಲಿ ಅಥವಾ ಪೊಲೀಸಿನವರ ಮೇಲೆ ಪ್ರಭಾವ ಬೀರಬಲ್ಲಂಥ ವ್ಯಕ್ತಿಯ ವಿರುದ್ಧವಾಗಿ ದೂರು ಸಲ್ಲಿಸಿದ್ದರೆ ಮಾತ್ರ ನಿಮ್ಮ ರಕ್ಷಣೆಯ ದೃಷ್ಟಿಯಿಂದ ನೀವು ನಿಮ್ಮೊಂದಿಗೆ ಯಾರನ್ನಾದರೂ ಕರೆದುಕೊಂಡು ಹೋಗಬೇಕು.

**ಎಫ್‌ಐಆರ್ ಅನ್ನು ಯಾವಾಗ ಸಲ್ಲಿಸಬೇಕು ?**

- ಸಾಧ್ಯವಾದಷ್ಟು ಬೇಗನೆ ನೀವು ಎಫ್‌ಐಆರ್ ಅನ್ನು ಸಲ್ಲಿಸಬೇಕು. ಇದು ಬಹು ಮುಖ್ಯ. ಏಕೆಂದರೆ ಇದರಿಂದ ಸಾಕ್ಷ ದೊರಕಿಸಿಕೊಳ್ಳುವುದು ಸುಲಭವಾಗುತ್ತದೆ, ಅಲ್ಲದೆ ಅಪರಾಧಿಯನ್ನು ದಸ್ತಗಿರಿ ಮಾಡುವುದೂ ಸಹ ಸುಲಭವಾಗುತ್ತದೆ.
- ಆಪಾದಿತನ ಹೆಸರು, ವಿಳಾಸ ಮತ್ತು ವಿವರಗಳು ನಿಮಗೆ ತಿಳಿದಿದ್ದರೆ ಅದನ್ನು ನೀವು ಎಫ್‌ಐಆರ್‌ನಲ್ಲಿಯೇ ಪೊಲೀಸರಿಗೆ ಕೊಡಬೇಕು.
- ಎಫ್‌ಐಆರ್ ಅನ್ನು ಸಲ್ಲಿಸಲು ಯಾವುದೇ ವಿಳಂಬವುಂಟಾದರೆ ಕಾರಣವನ್ನು ಎಫ್‌ಐಆರ್‌ನಲ್ಲಿಯೇ ವಿವರಿಸಿ ಬರೆಯಿರಿ. ಇದೂ ಸಹ ಬಹು ಮುಖ್ಯವಾದುದು.

## ಈ ಮಾಲಿಕೆಯಲ್ಲಿ

**1** ದುಡಿಯುವ ಮಹಿಳೆಯರಿಗೆ ಕಾನೂನುಗಳು
ಪರಿಹಾರ ಪಡೆಯುವ ಹಕ್ಕು ಮತ್ತು
ಬಾಲಕಾರ್ಮಿಕರು

**2** ಕರಾರು ಕಾರ್ಮಿಕ
ಅಂತರರಾಜ್ಯ ವಲಸೆ ಕೆಲಸಗಾರರು

**3** ಜೀತ ಕಾರ್ಮಿಕ
ನಾಗರೀಕ ಹಕ್ಕುಗಳ ರಕ್ಷಣೆ

**4** ಹಿಂದು ದತ್ತಕ ಮತ್ತು ಜೀವನಾಂಶ ಅಧಿನಿಯಮ,1956
ವೈದ್ಯಕೀಯ ಗರ್ಭಸಮಾಪನೆ

**5** ಹಿಂದು ವಿವಾಹ ಕಾನೂನು
ಆಸ್ತಿಯ ಹಕ್ಕು

**6** ಮುಸ್ಲಿಂ ವಿವಾಹ ಕಾನೂನು
ಆಸ್ತಿಯ ಹಕ್ಕು

**7** ಕ್ರೈಸ್ತ ವಿವಾಹ ಕಾನೂನು
ಆಸ್ತಿಯ ಹಕ್ಕು

**8** ವರದಕ್ಷಿಣೆ

**9** ಅತ್ಯಾಚಾರ
ಬಲಾತ್ಕಾರದ ಅಪಹರಣ

**10** ಪೊಲೀಸರು ಮತ್ತು ನೀವು

'ನಮ್ಮ ಕಾನೂನುಗಳು' ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳರೀತಿಯಲ್ಲಿ ತಿಳುವಳಿಕೆ-ನೀಡುವ ಹತ್ತು ಪುಸ್ತಿಕೆಗಳ ಒಂದು ಮಾಲಿಕೆಯಾಗಿದೆ. ಈ ಮಾಲಿಕೆಯಲ್ಲಿ, ಕೆಳವರ್ಗದ ಹೆಂಗಸರು, ಅದರಲ್ಲೂ ನವ ಸಾಕ್ಷರ ಮಹಿಳೆಯರು, ಬಳಸಲಿಕ್ಕೆ ಸಾಧ್ಯವಾಗಲಿ ಎನ್ನುವ ಉದ್ದೇಶದಿಂದ ನಿರೂಪಣೆಯನ್ನು ಸಾಧ್ಯವಾದಷ್ಟೂ ಸರಳವಾಗಿ, ಸಂಕ್ಷಿಪ್ತವಾಗಿ, ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ, ಉಪಮೆಗಳನ್ನ, ಉದಾಹರಣೆಗಳನ್ನ ನೀಡಿ ರಚಿಸಲಾಗಿದೆ. ಯಾರಿಗೆ ಈ ಕಾನೂನುಗಳು ತೀರ ಅವಶ್ಯಕವಿದೆಯೋ ಅಂತಹವರನ್ನ ಈ ಪುಸ್ತಿಕೆಗಳು ತಲುಪಬೇಕೆಂದು ನಮ್ಮ ಆಶಯ. ಈ ಹತ್ತು ಪುಸ್ತಕಗಳು ಕಾನೂನಿನ ಸಮಗ್ರ ಪಾಠವೇನಲ್ಲ. ಒಟ್ಟಾರೆಯಾಗಿ ಮಹಿಳೆಯರಿಗೆ ತಮ್ಮ ನಾಗರೀಕ ಹಕ್ಕುಗಳ ಅರಿವಾಗಲಿ, ಅವರು ಆತ್ಮವಿಶ್ವಾಸದಿಂದ ಹಾಗೂ ಸಂದಿಗ್ಧರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿಕೊಡುವಂತಾಗಲಿ ಎಂದು ಈ ಮಾಲಿಕೆ ಬಯಸುತ್ತದೆ.

ಈ ಪುಸ್ತಿಕೆಗಳ ಹಿಂದಿ ಅನುವಾದದಲ್ಲಿ, ಈಗಾಗಲೇ ಅವುಗಳನ್ನ, ಗ್ರಾಮೀಣ ಮಹಿಳೆಯರ ಕಾರ್ಯಾಗಾರಗಳಲ್ಲಿ ಬಳಸಿ, ಇವುಗಳ ಪರಿಣಾಮವನ್ನ ಪರೀಕ್ಷಿಸಲಾಗಿದೆ. ಹಲವು ಸಾಮಾಜಿಕ ಕಾರ್ಯಕರ್ತರುಗಳೊಡನೆ, ಕಾನೂನು ತಜ್ಞರುಗಳೊಡನೆ, ನಡೆಸಿದ ಕಾರ್ಯಾಗಾರಗಳಲ್ಲಿ ಕೂಡ ಇವುಗಳ ಬಳಕೆ ಹಾಗೂ ಪರೀಕ್ಷೆ ಆಗಿದೆ. ಆಗ ಬಂದ ಅಭಿಪ್ರಾಯಗಳನ್ನ ಮನನ ಮಾಡಿ ಪುಸ್ತಿಕೆಗಳನ್ನ ತಿದ್ದಿ ಪ್ರಕಟಿಸಲಾಗಿದೆ.

ಈಗ ಕನ್ನಡದಲ್ಲಿ **'ನಮ್ಮ ಕಾನೂನುಗಳು'** ನಿಮ್ಮ ಕೈಸೇರುತ್ತಿದೆ. ಮೇಲೆ ಹೇಳಿದ ಆಶಯಗಳನ್ನ ಗಮನದಲ್ಲಿಟ್ಟುಕೊಂಡು, ಇಲ್ಲಿ ಸಲ್ಲುವ ಉಪಮೆಗಳು, ಉದಾಹರಣೆಗಳನ್ನ, ಬಳಸಿಕೊಂಡು ಹೆಗ್ಗೋಡಿನ **ಕವಿಕಾವ್ಯ ಟ್ರಸ್ಟಿನವರು** ಕನ್ನಡ ಅವತರಣಿಕೆಯನ್ನ ಸಿದ್ಧಗೊಳಿಸಿದ್ದಾರೆ. **ಯುನಿಸೆಫ್** ಸಂಸ್ಥೆಯ ಉದಾರ ನೆರವಿನಿಂದಾಗಿ ಇದರ ಪ್ರಕಟಣೆ ಸಾಧ್ಯವಾಗುತ್ತಿದೆ. ಈ ಪುಸ್ತಕಗಳ ಪ್ರಯೋಜನವನ್ನ, ನವಸಾಕ್ಷರ ಮಹಿಳೆಯರು, ದುಡಿಯುವ ಮಹಿಳೆಯರ ಸಂಘಟನೆಗಳು, ಅಂಗನವಾಡಿ ಕಾರ್ಯಕರ್ತೆಯರು, ಪಂಚಾಯತಿ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು, ಆರೋಗ್ಯ ಕಾರ್ಯಕರ್ತರು, ಶಾಲಾ ಅಧ್ಯಾಪಕರುಗಳು, ಸಾಕ್ಷರತಾ ಕಾರ್ಯಕರ್ತರು, ಹಾಗೂ 'ಡ್ವಾಕ್ರ' ಗುಂಪುಗಳು, ಪಡೆಯಬೇಕೆಂಬ ಉದ್ದೇಶದಿಂದ ಕರ್ನಾಟಕ ರಾಜ್ಯಮಹಿಳಾ ಅಭಿವೃದ್ಧಿ ನಿಗಮ, ವ್ಯಾಪಕ ರೀತಿಯಲ್ಲಿ ಅವುಗಳನ್ನ ಜನತೆಗೆ ತಲುಪಿಸಲು ಏರ್ಪಾಡುಮಾಡಿದೆ.


**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ**

16ನೆಯ ಮಹಡಿ, ಬಹುಪಯೋಗಿ ಕಟ್ಟಡ, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು : 560001, ಫೋ: 5587418, 5588250

**ಮೂಲ ಪ್ರಕಾಶಕರು**

**ಮಾರ್ಗ್**

113-ಎ, ಶಾಪುರ್ ಜಾಟ್, ಏಷಿಯಾಡ್ ಗ್ರಾಮದ ಸಮೀಪ

ನವದೆಹಲಿ-110016, ಫೋ : 6467463.